## ಉಪ ನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ನಂ.177, 22ನೇ ಕ್ರಾಸ್, 3ನೇ ಬ್ಲಾಕ್, ಜಯನಗರ ಬೆಂಗಳೂರು-560 011

### ಪ್ರಕಟಣೆ

**ಸಂ:ಉಪನಿ:ಬೆಂ(ನ) ಮಮಅಇ:ಗ್ರೂಪ್ 'ಡಿ' ನೇರ ನೇಮಕ: 2004-05 ದಿನಾಂಕ: 20ನೇ ಮೇ 2004**

**ವಿಷಯ :** ಬೆಂಗಳೂರು ನಗರ ಜಿಲ್ಲೆಯ ವ್ಯಾಪ್ತಿಯಲ್ಲಿನ ಶಿಶು ಅಭಿವೃದ್ಧಿ ಯೋಜನೆಯಲ್ಲಿ ಖಾಲಿ ಇರುವ ಒಂದು ಗ್ರೂಪ್ 'ಡಿ' ಹುದ್ದೆಗೆ ಪರಿಶಿಷ್ಟ ಜಾತಿಯ ಅಭ್ಯರ್ಥಿಯನ್ನು ತುಂಬಲು ನೇರ ನೇಮಕಾತಿಯ ಮುಖಾಂತರ ಆಯ್ಕೆಗೊಂಡ ಅಭ್ಯರ್ಥಿಯ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ.

**ಉಲ್ಲೇಖ :** 1. ಕೇಂದ್ರ ಕಛೇರಿಯ ಪತ್ರ ಸಂ:ಮಮಅಇ:ನಿಸಿಡಿ-4 2001-02 ದಿನಾಂಕ: 22.8.2003.
2. ಪತ್ರಿಕಾ ಪ್ರಕಟಣೆ ದಿನಾಂಕ: 3.10.2003.

ಬೆಂಗಳೂರು ನಗರ ಜಿಲ್ಲೆಯ ಶಿಶು ಅಭಿವೃದ್ಧಿ ಯೋಜನೆಯಲ್ಲಿ ಖಾಲಿ ಇರುವ ಒಂದು ಗ್ರೂಪ್ 'ಡಿ' ಹುದ್ದೆಯನ್ನು ಪರಿಶಿಷ್ಟ ಜಾತಿಯ ಅಭ್ಯರ್ಥಿಯಿಂದ ತುಂಬಲು, ಕೇಂದ್ರ ಕಛೇರಿಯ ಉಲ್ಲೇಖ (1)ರ ಪತ್ರದಲ್ಲಿ ಸೂಚಿಸಿರುವಂತೆ, ಉಲ್ಲೇಖ (2)ರ ದಿನಾಂಕದಲ್ಲಿ ಪತ್ರಿಕಾ ಪ್ರಕಟಣೆ ನೀಡಿ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು.

ಪ್ರಕಟಣೆಯನ್ವಯ ಸ್ವೀಕೃತವಾಗಿದ್ದ ಅರ್ಜಿಗಳನ್ನು, ನಿಯಮಾನುಸಾರ 18 ರಿಂದ 38 ವರ್ಷ ವಯೋಮಿತಿಯೊಳಗಿರುವ ಪರಿಶಿಷ್ಟ ಜಾತಿಯ ಅಭ್ಯರ್ಥಿಯು, 7ನೇ ತರಗತಿಯ ಪರೀಕ್ಷೆಯಲ್ಲಿ ಪಡೆದಿರುವ ಗರಿಷ್ಠ ಅಂಕಗಳಿಗನುಗುಣವಾಗಿ ಪರಿಶೀಲಿಸಿ, ಈ ಕೆಳಕಂಡ ಅರ್ಜಿ ಪರಿಶಿಷ್ಠ ಜಾತಿಯ ಅಭ್ಯರ್ಥಿಯನ್ನು ತಾತ್ಕಾಲಿಕವಾಗಿ ಆಯ್ಕೆ ಮಾಡಿ ಪ್ರಕಟಿಸಲಾಗಿದೆ.

| ಕ್ರ. ಸಂ. | ಅರ್ಜಿಸಂ: | ಆಯ್ಕೆಗೊಂಡ ಅಭ್ಯರ್ಥಿಯ ಹೆಸರು ವಿಳಾಸ | ಜಾತಿ | ವಿದ್ಯಾರ್ಹತೆ | ಜನ್ಮದಿನಾಂಕ | ಶೇಕಡವಾರು ಗಳಿಸಿದ ಅಂಕಗಳು |
|---|---|---|---|---|---|---|
| 1) | 24 | ಶ್ರೀ ಸಿ. ಶಿವಶಂಕರ ತಂದೆ ಚಿನ್ನಯ್ಯ ಹಲಸಹಳ್ಳಿ ಹೊಸ ಕೋಟೆ (ತಾಲ್ಲೂಕು) | ಆದಿ ಕರ್ನಾಟಕ | 7ನೇ ತರಗತಿ | 8.11.76 | 97.66 |

ಉಪ ನಿರ್ದೇಶಕರು,
ಪಿ.ಆರ್.253 ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ನಗರ ಜಿಲ್ಲೆ.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ರವರ ಕಛೇರಿಯ ಪ್ರಕಟಣೆ

### ಬಹಿರಂಗ ಹರಾಜು ಮರು ಪ್ರಕಟಣೆ

**ಸಂ:ಎ3-ಬಿಯಡಿ-ಸಿಆರ್-18/2004-05 ದಿನಾಂಕ: 5ನೇ ಜೂನ್ 2004**

**ವಿಷಯ :** ಹೊಸಕೋಟೆ ಅರಣ್ಯ ವಲಯದಲ್ಲಿ ನೀಲಗಿರಿ ಟಿಂಬರ್ ಲಾಗ್‌ಗಳ ಬಹಿರಂಗ ಹರಾಜು ಕುರಿತು.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಬೆಂಗಳೂರು ಗ್ರಾಮಾಂತರ ಅರಣ್ಯ ವಿಭಾಗದ ಹೊಸಕೋಟೆ ಅರಣ್ಯ ವಲಯದ ಜಡಿಗೇನಹಳ್ಳಿ ನೆಡುತೋಪಿನಲ್ಲಿ ಕತ್ರಾವಣೆ ಮಾಡಿದ ನೀಲಗಿರಿ ಮರಗಳಿಂದ ಲಭ್ಯವಾದ ಟಿಂಬರನ್ನು ವಲಯ ಅರಣ್ಯಾಧಿಕಾರಿಗಳ ಕಛೇರಿ ಆವರಣದಲ್ಲಿ ಲಾಗ್‌ಗಳನ್ನು ಬಹಿರಂಗ ಹರಾಜು ಮೂಲಕ ದಿನಾಂಕ: 2.07.2004 ರಂದು ಬೆಳಿಗ್ಗೆ 11.30 ಗಂಟೆಗೆ ಹೊಸಕೋಟೆ ಪ್ರಾದೇಶಿಕ ಅರಣ್ಯ ವಲಯ ಕಛೇರಿ ಆವರಣದಲ್ಲಿ ಕೆಳಸಹಿದಾರರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕೃತ ಅಧಿಕಾರಿಯು ಕೆಳಕಂಡ ಷರತ್ತುಗಳ ಮೇಲೆ ಬಹಿರಂಗ ಹರಾಜನ್ನು ಮಾಡಲು ಉದ್ದೇಶಿಸಿ ಪ್ರಕಟಣೆ ಹೊರಡಿಸಲಾಗಿದೆ.

1. ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವವರು 5,000.00 ರೂ.ಗಳ ಇ.ಎಂ.ಡಿ. ಠೇವಣಿ ಇಡಬೇಕಾಗುತ್ತದೆ.
2. ಷೆಡ್ಯೂಲ್‌ನಲ್ಲಿ ಸೂಚಿಸಿರುವ ನಿಗದಿತ ಸಮಯ ಮತ್ತು ದಿನಾಂಕದಂದು ಬಹಿರಂಗ ಹರಾಜನ್ನು ನಡೆಸಲಾಗುವುದು.
3. ಹರಾಜಿನಲ್ಲಿ ಭಾಗವಹಿಸುವ ಮೊದಲು ಷೆಡ್ಯೂಲಿನಲ್ಲಿ ನಮೂದಿಸಿರುವ ಇಡುಗಂಟನ್ನು (ಇ.ಎಂ.ಡಿ) ನಗದು ರೂಪದಲ್ಲಿ ಪಾವತಿಸತಕ್ಕದ್ದು.
4. ಇಡುಗಂಟನ್ನು ಜಮಾ ಮಾಡದೇ ಬಿಡ್‌ದಾರರು ಹರಾಜಿನಲ್ಲಿ ಭಾಗವಹಿಸುವ ಹಕ್ಕು ಇರುವುದಿಲ್ಲ.
5. ಷೆಡ್ಯೂಲ್‌ನಲ್ಲಿ ಸೂಚಿಸಿರುವ ಮತ್ತು ಕತ್ರಾವಣೆ ಮಾಡಿ ಲಾಟ್ ಮಾಡಿರುವ ನೀಲಗಿರಿ ಮರಗಳ ಲಾಗ್‌ಗಳನ್ನು ಪರಿಶೀಲಿಸಿ ಖಚಿತಪಡಿಸಿಕೊಂಡ ನಂತರ ಹರಾಜಿನಲ್ಲಿ ಭಾಗವಹಿಸಬೇಕು.
6. ಷೆಡ್ಯೂಲ್‌ನಲ್ಲಿ ತೋರಿಸಿರುವ ಪ್ರತಿ ಲಾಟ್‌ಗೆ ಪ್ರತ್ಯೇಕ ಹರಾಜು ಮಾಡಲಾಗುವುದು.
7. ಯಶಸ್ವಿ ಬಿಡ್‌ದಾರರು ತಮ್ಮ ಸ್ವಂತ ಖರ್ಚಿನಲ್ಲಿ ವಿಲೇವಾರಿ ಮಾಡಿಕೊಳ್ಳತಕ್ಕದ್ದು.
8. ಟಿಂಬರ್ ಲಾಗ್‌ಗಳನ್ನು ಸಾಗಿಸಲು ಪರವಾನಗಿಯನ್ನು ನೀಡಲಾಗುವುದು. ಪರವಾನಗಿ ಶುಲ್ಕವನ್ನು ಯಶಸ್ವಿ ಬಿಡ್‌ದಾರರು ವಲಯ ಅರಣ್ಯಾಧಿಕಾರಿ ಹೊಸಕೋಟೆ, ರವರಲ್ಲಿ ಜಮಾ ಮಾಡತಕ್ಕದ್ದು.

9. ಅತಿ ಹೆಚ್ಚು ಬಿಡ್‌ದಾರರು ಹರಾಜಿನ ದಿನದಂದೇ ತಾವು ಸೂಚಿಸಿದ ಹರಾಜಿನ ಮೊತ್ತದ ಶೇಕಡ 50% ರಷ್ಟು ಹಣವನ್ನು ಹಾಗೂ ಸೂಚಿಸಿದ ಮೊತ್ತಕ್ಕೆ ಅನ್ವಯಿಸುವ ಪೂರ್ತಿ ತೆರಿಗೆಯನ್ನು ಜಮಾ ಮಾಡತಕ್ಕದ್ದು. ತಪ್ಪಿದಲ್ಲಿ ಇ.ಎಂ.ಡಿ. ಮೊತ್ತವನ್ನು ಮುಟ್ಟುಗೋಲು ಹಾಕಿಕೊಂಡು 2ನೇ ಬಿಡ್‌ದಾರರು ಯಶಸ್ವಿ ಬಿಡ್ಡುದಾರರೆಂದು ಪರಿಗಣಿಸಲಾಗುವುದು.
10. ಬಿಡ್‌ದಾರರು ಈ ಕಛೇರಿಯಿಂದ ಕಾರ್ಯಾದೇಶ ಪಡೆದ 3 ದಿನಗಳೊಳಗಾಗಿ ಟಿಂಬರ್ ಲಾಗ್‌ಗಳನ್ನು ತೆಗೆದುಕೊಂಡು ಹೋಗತಕ್ಕದ್ದು.
11. ಯಶಸ್ವಿ ಬಿಡ್‌ದಾರರಿಗೆ ಆಗುವ ಲಾಭ ಅಥವಾ ನಷ್ಟಗಳಿಗೆ ಇಲಾಖೆ ಜವಾಬ್ದಾರಿಯಲ್ಲ.
12. ಬಹಿರಂಗ ಹರಾಜಿನಲ್ಲಿ ಉದ್ಭವಿಸಬಹುದಾದ ತಂಟೆತಕರಾರುಗಳಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ರವರು ನೀಡುವ ತೀರ್ಮಾನವೇ ಅಂತಿಮವಾಗಿರುತ್ತದೆ.
13. ಕಪ್ಪು ಪಟ್ಟಿಯಲ್ಲಿರುವ ಬಿಡ್‌ದಾರರು ಅಥವಾ ದಿವಾಳಿಯಾಗಿರುವವರು ಈ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುವುದಿಲ್ಲ.
14. ಹರಾಜಿನ ನಂತರ ಬರುವ ಬೆಲೆಗಳನ್ನು ಯಾವುದೇ ಕಾರಣಕ್ಕೂ ಪರಿಗಣಿಸಲಾಗುವುದಿಲ್ಲ.
15. ಯಾವುದೇ ತಂಟೆ ತಕರಾರುಗಳಿದ್ದಲ್ಲಿ ಹರಾಜು ಪ್ರಾರಂಭಿಸುವ ಎರಡು ಗಂಟೆ ಮುಂಚಿತವಾಗಿ ಸಂಬಂಧಿಸಿದ ಅಧಿಕಾರಿಗಳ ಗಮನಕ್ಕೆ ಲಿಖಿತ ಮೂಲಕ ತರತಕ್ಕದ್ದು ಹಾಗೂ ಹರಾಜಿನ ನಂತರ ತಡವಾಗಿ ಬರುವ ಯಾವುದೇ ತರಹದ ದೂರುಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.
16. ಯಶಸ್ವಿ ಬಿಡ್‌ದಾರರು ತಮ್ಮ ಬಿಡ್ಡಿನ ಬೆಲೆಯ ಮೇಲೆ ಮಾರಾಟ ತೆರಿಗೆ 13%, ಮಾರಾಟ ತೆರಿಗೆಯ ಮೇಲೆ ಸರ್ಚಾರ್ಜ್ 15%, ಅರಣ್ಯ ಅಭಿವೃದ್ಧಿ ತೆರಿಗೆ 12%, ಆದಾಯ ತೆರಿಗೆ 15% ಮತ್ತು ಆದಾಯ ತೆರಿಗೆ ಮೇಲೆ ಸೆಸ್ 5% ರಷ್ಟು ಪಾವತಿಸಬೇಕು.
17. ಯಶಸ್ವಿ ಬಿಡ್‌ದಾರರು ನಿಗದಿತ ಅವಧಿಯಲ್ಲಿ ಟಿಂಬರ್ ಸಾಗಿಸದ ಪಕ್ಷದಲ್ಲಿ ಇ.ಎಂ.ಡಿ. ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ ಬಿಡ್‌ದಾರರ ಜವಾಬ್ದಾರಿ ಮೇರೆಗೆ ಟಿಂಬರನ್ನು ಮರು ಹರಾಜು ಮಾಡಲಾಗುವುದು. ಮರು ಹರಾಜಿನಲ್ಲಿ ಕಡಿಮೆ ಬಿಡ್ ಬಂದು ಸರ್ಕಾರಕ್ಕೆ ನಷ್ಟವಾದಲ್ಲಿ ಸೆಕ್ಷನ್ 109ರ ಕರ್ನಾಟಕ ಅರಣ್ಯ ಕಾಯ್ದೆಯಂತೆ ಬಾಕಿ ಭೂಕಂದಾಯ ರೂಪದಲ್ಲಿ ವಸೂಲಿ ಮಾಡಲಾಗುವುದು ಅಥವಾ ಸೆಕ್ಷನ್ 54(54) ಸರಕು ಸಾಮಗ್ರಿಗಳ ಮಾರಾಟದ ಕಾನೂನಿನ್ವಯ ಅಥವಾ ಸಿವಿಲ್ ಪ್ರೊಸೀಜರ್ ಕೋಡ್ ಅನ್ವಯ ಕ್ರಮ ಕೈಗೊಳ್ಳಲಾಗುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು.

## ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು

## ಷೆಡ್ಯೂಲ್

| ಲಾಟು ಸಂ. | ವಿವರಗಳು (ನೀಲಗಿರಿ ಟಿಂಬರ್ ಲಾಗ್‌ಗಳು) | ಅಂದಾಜು ಪ್ರಮಾಣ | ಮಾರಾಟದ ದಿನಾಂಕ | ಇಎಂಡಿ (ಪ್ರತಿ ಲಾಟಿಗೆ) |
|---|---|---|---|---|
| 1 | 2 | 3 | 4 | 5 |
| 1. | 22 ತುಂಡುಗಳು | 4.962 Cmtr. | 02.07.2004 | 5,000.00 |
| 2. | 22 ತುಂಡು | 4.559 Cmtr. | | |
| 3. | 20 ತುಂಡುಗಳು | 5.669 Cmtr. | | |
| 4. | 23 ತುಂಡುಗಳು | 4.576 Cmtr. | | |
| 5. | 30 ತುಂಡುಗಳು | 5.844 Cmtr. | | |
| 6. | 22 ತುಂಡುಗಳು | 4.389 Cmtr. | | |
| 7. | 18 ತುಂಡುಗಳು | 3.220 Cmtr. | | |
| 8. | 9 ತುಂಡುಗಳು | 2.233 Cmtr. | | |
| 9. | 10 ತುಂಡುಗಳು | 2.203 Cmtr. | | |
| 10. | 13 ತುಂಡುಗಳು | 3.156 Cmtr. | | |
| 11. | 14 ತುಂಡುಗಳು | 3.586 Cmtr. | | |
| 12. | 13 ತುಂಡುಗಳು | 3.790 Cmtr. | | |
| 13. | 8 ತುಂಡುಗಳು | 2.688 Cmtr. | | |
| 14. | 9 ತುಂಡುಗಳು | 2.180 Cmtr. | | |
| 15. | 8 ತುಂಡುಗಳು | 2.014 Cmtr. | | |
| 16. | 8 ತುಂಡುಗಳು | 2.723 Cmtr. | | |
| 17. | 6 ತುಂಡುಗಳು | 1.981 Cmtr. | | |
| 18. | 9 ತುಂಡುಗಳು | 1.985 Cmtr. | | |
| 19. | 9 ತುಂಡುಗಳು | 1.723 Cmtr. | | |

| 1 | 2 | 3 | 4 | 5 |
|---|---|---|---|---|
| 20. | 9 ತುಂಡುಗಳು | 2.246 Cmtr. | | |
| 21. | 12 ತುಂಡುಗಳು | 2.887 Cmtr. | | |
| 22. | 11 ತುಂಡುಗಳು | 2.344 Cmtr. | | |
| 23. | 7 ತುಂಡುಗಳು | 1.467 Cmtr. | | |
| 24. | 9 ತುಂಡುಗಳು | 2.019 Cmtr. | | |
| 25. | 7 ತುಂಡುಗಳು | 1.377 Cmtr. | | |
| 26. | 6 ತುಂಡುಗಳು | 1.432 Cmtr. | | |
| 27. | 19 ತುಂಡುಗಳು | 4.874 Cmtr. | | |
| 28. | 17 ತುಂಡುಗಳು | 4.038 Cmtr. | | |
| 29. | 19 ತುಂಡುಗಳು | 4.896 Cmtr. | | |
| 30. | 10 ತುಂಡುಗಳು | 2.745 Cmtr. | | |
| 31. | 6 ತುಂಡುಗಳು | 2.252 Cmtr. | | |
| 32. | 7 ತುಂಡುಗಳು | 2.646 Cmtr. | | |
| 33. | 5 ತುಂಡುಗಳು | 2.121 Cmtr. | | |
| | **Total** | **101.185 Cmtr.** | | |

ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ
ಪಿ.ಆರ್.258 ವಿಭಾಗ, ಬೆಂಗಳೂರು.

**ನಮೂನೆ-1**

**9ನೇ ನಿಯಮ ನೋಡಿ**

**ಶಿಕ್ಷಣ ಇಲಾಖೆ**

**ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಗದಗ**

ಸರಕಾರಿ ಪದವಿ ಪೂರ್ವ ಕಾಲೇಜು, ಪ್ರೌಢಶಾಲಾ ವಿಭಾಗ, ನರಗುಂದ ಇಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ ಕೆಲಸ ಮಾಡುತ್ತಿರುವ **ಶ್ರೀ ಜಿ. ಶರಣಬಸಪ್ಪ ಎಚ್ ಗಂಗಾಧರಪ್ಪ ಕಟ್ಟಿಮನಿ** ಎಂಬುವವರ ಹೆಸರನ್ನು **ಕರಣ್ ಗಂಗಾಧರ ಕಟ್ಟಿಮನಿ** ಎಂದು ಹೆಸರು ಬದಲಾವಣೆ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

ಪಿಡಿ.109 ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗದಗ.

**FORM-IV**

**(See Rule 12)**

**NOTICE**

It is hereby notified that the undersigned has changed his/her name from **MALLAPPA BHIMAPPA HUCHCHAHOLEPPAGOL** to **MALLAPPA BHIMAPPA HULEPPAGOL**

PD-110 **MALLAPPA BHIMAPPA HULEPPAGOL**

**ಪೊಲೀಸ್ ಮಹಾ ನಿರ್ದೇಶಕರವರ ಕಾರ್ಯಾಲಯ ಸಿ.ಓ.ಡಿ. ತರಬೇತಿ, ವಿಶೇಷ ಘಟಕಗಳು ಮತ್ತು ಆರ್ಥಿಕ ಅಪರಾಧಗಳು**

**ಕಾರ್ಲ್‌ಟನ್ ಭವನ, ಅರಮನೆ ರಸ್ತೆ, ಬೆಂಗಳೂರು-560 001.**

**ಅಧಿಸೂಚನೆ ಸಂಖ್ಯೆ: ಎಂಟಿ:113:ಸಿಓಡಿ:2004-05 ದಿನಾಂಕ: 5ನೇ ಜೂನ್ 2004**

**ವಿಷಯ :** ಸಿ.ಓ.ಡಿ. ಘಟಕಕ್ಕೆ ಸೇರಿದ 6 ನಿರುಪಯುಕ್ತ ಪೊಲೀಸ್ ವಾಹನಗಳನ್ನು ಟೆಂಡರ್/ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ :** 1. ಸರ್ಕಾರಿ ಆದೇಶ ಸಂ:ಎಂಟಿ (1) 37/2000-01 ದಿನಾಂಕ: 23.9.2000

2. ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು ಕರ್ನಾಟಕ ರಾಜ್ಯ, ಬೆಂಗಳೂರು ರವರ ಆದೇಶ ಪತ್ರ ಸಂ: ವಾಸಾ (1) 86:2002-03 ದಿನಾಂಕ: 28.4.04.

ಸಾರ್ವಜನಿಕರ ಮಾಹಿತಿಗಾಗಿ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಸಿ.ಓ.ಡಿ. ಘಟಕದ ಕಛೇರಿ ಮುಂಭಾಗದಲ್ಲಿ ಯಥಾಸ್ಥಿತಿಯಲ್ಲಿರುವ ಈ ಕೆಳಕಂಡ 6 ಪೊಲೀಸ್ ವಾಹನಗಳನ್ನು ಟೆಂಡರ್/ಬಹಿರಂಗ ಹರಾಜು ಮೂಲಕ ಡಿ.ಜಿ.ಪಿ., ಸಿ.ಓ.ಡಿ. ರವರ ಕಛೇರಿಯ ಆವರಣದಲ್ಲಿ ಸರ್ಕಾರಿ ಆದೇಶದಂತೆ ಹಾಗೂ ಪೊಲೀಸ್ ಪ್ರಧಾನ ಕಛೇರಿಯ ಆದೇಶದಂತೆ ದಿನಾಂಕ: 27.7.04 ರಂದು ಬೆಳಿಗ್ಗೆ 11.00 ಗಂಟೆಗೆ ಬಹಿರಂಗ ಹರಾಜು (ಮಾರಾಟ) ಮಾಡಲಾಗುವುದು.

| ಕ್ರ.ಸಂ. | ವಾಹನ ನೋಂದಣಿ ಸಂಖ್ಯೆ | ಮಾಡಲ್ | ಖರೀದಿಸಿದ ವರ್ಷ |
|---|---|---|---|
| 1. | ಸಿಎಬಿ 1879 | ಟೆಂಪೊ | 1986 |
| 2. | ಸಿಎಬಿ 6036 | ಮೋಟಾರ್ ಸೈಕಲ್ | 1980 |

| ಕ್ರ.ಸಂ. | ವಾಹನ ನೋಂದಣಿ ಸಂಖ್ಯೆ | ಮಾಡಲ್ | ಖರೀದಿಸಿದ ವರ್ಷ |
|---|---|---|---|
| 3. | ಸಿಕೆಜಿ 48 | ಮೋಟಾರ್ ಸೈಕಲ್ | 1986 |
| 4. | ಎಂಇಜೆ 9446 | ಮೋಟಾರ್ ಸೈಕಲ್ | 1980 |
| 5. | ಎಂಇಎ 3522 | ಕಾರು | 1975 |
| 6. | ಸಿಎಜಿ 244 | ಕಾರು | 1987 |

**ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1. ಮೊಹರು ಮಾಡಿದ (ಸೀಲ್ಡ್ ಟೆಂಡರ್) ಲಕೋಟೆಯನ್ನು ಡಿ.ಜಿ.ಪಿ., ಸಿ.ಓ.ಡಿ. ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ "ನಿರುಪಯುಕ್ತ ವಾಹನಗಳನ್ನು ಖರೀದಿಸುವ ಬಗ್ಗೆ" ಎಂಬುದನ್ನು ಬಿಡಿ ಅಕ್ಷರಗಳಲ್ಲಿ ನಮೂದಿಸಬೇಕು.
2. ಪ್ರತಿಯೊಬ್ಬ ಸವಾಲುದಾರನ ಪ್ರತಿ ವಾಹನಕ್ಕೆ ರೂ.2000-00 (ರೂ. ಎರಡು ಸಾವಿರಗಳು ಮಾತ್ರ) ಠೇವಣಿ ಹಣವನ್ನು ನಗದು ಮೂಲಕ ಡಿ.ಐ.ಜಿ.ಪಿ., ಸಿಓಡಿ ರವರ ಕಛೇರಿಯಲ್ಲಿ ಅರ್ಜಿಯ ಜೊತೆ ಸಲ್ಲಿಸತಕ್ಕದ್ದು. ಠೇವಣಿ ಹಣಕ್ಕೆ ಬಡ್ಡಿಯನ್ನು ಕೊಡಲಾಗುವುದಿಲ್ಲ. ಠೇವಣಿ ಹಣವಿಲ್ಲದೆ ಹರಾಜಿನಲ್ಲಿ ಭಾಗವಹಿಸುವಂತಿಲ್ಲ. ಠೇವಣಿ ಇಲ್ಲದೆ ಸಲ್ಲಿಸಿದ ಅರ್ಜಿಯನ್ನು ತಿರಸ್ಕರಿಸಲಾಗುವುದು.
3. ಪ್ರತಿಯೊಬ್ಬ ಸವಾಲುದಾರನು ಟೆಂಡರ್ ಫಾರಂನಲ್ಲಿ ಅತೀ ಹೆಚ್ಚಿನ ದರವನ್ನು ಅಂಕಿ ಮತ್ತು ಅಕ್ಷರಗಳೆರಡರಲ್ಲಿಯೂ ಬರೆದಿರಬೇಕು. ಟೆಂಡರ್ ಫಾರಂನಲ್ಲಿ ಬೆಲೆಯನ್ನು ಬರೆಯುವಾಗ ಏನಾದರೂ ತಿದ್ದುಪಡಿ ಮಾಡಿದ್ದರೆ ಆ ಸ್ಥಳದಲ್ಲಿ ಟೆಂಡರ್‌ದಾರರು ಪೂರ್ಣ ಸಹಿ ಮಾಡತಕ್ಕದ್ದು. ಪ್ರತಿಯೊಂದು ವಾಹನಕ್ಕೆ ಪ್ರತ್ಯೇಕವಾಗಿ ಟೆಂಡರ್ ಫಾರಂ ಅನ್ನು ಸಲ್ಲಿಸತಕ್ಕದ್ದು.
4. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
5. ಪೂರ್ಣಗೊಳಿಸಿದ ಟೆಂಡರ್ ಫಾರಂಗಳನ್ನು ದಿನಾಂಕ: 24.07.04ರ ಸಂಜೆ 4.00 ಗಂಟೆಯವರೆಗೆ ಡಿ.ಜಿ.ಪಿ., ಸಿಓಡಿ ರವರ ಕಛೇರಿಯಲ್ಲಿ ಸ್ವೀಕರಿಸಲಾಗುವುದು. ನಂತರ ಬಂದ ಟೆಂಡರ್ ಫಾರಂಗಳನ್ನು ಪರಿಗಣಿಸಲಾಗುವುದಿಲ್ಲ.
6. ಟೆಂಡರ್‌ದಾರರೂ ಸಹ ಬಹಿರಂಗ ಹರಾಜಿನಲ್ಲಿ ಹೆಚ್ಚಿನ ಠೇವಣಿ ಹಣವಿಲ್ಲದೆ ಭಾಗವಹಿಸಬಹುದು. ಸವಾಲು ಮೂಲಕ ಹರಾಜು ಮಾಡಲಾಗುವುದು. ಸವಾಲುದಾರರು (ಟೆಂಡರ್‌ದಾರರನ್ನು ಹೊರತುಪಡಿಸಿ) ಠೇವಣಿ ರೂಪದಲ್ಲಿ ಪ್ರತಿ ವಾಹನಕ್ಕೆ ರೂ.2000-00 (ರೂ. ಎರಡು ಸಾವಿರಗಳು ಮಾತ್ರ) ಅನ್ನು ಸ್ಥಳದಲ್ಲಿ ಪಾವತಿ ಮಾಡಲು ಅವಕಾಶವಿರುತ್ತದೆ.
7. ಡಿ.ಐ.ಜಿ.ಪಿ., ಸಿ.ಓ.ಡಿ. ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜನ್ನು ನಡೆಸುವರು. ಠೇವಣಿಯನ್ನು ತುಂಬಿದ ಟೆಂಡರ್‌ದಾರರು ಅಥವಾ ಸವಾಲುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.
8. ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬಿಡ್‌ದಾರರನ್ನು ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್‌ಗಳನ್ನು ಡಿ.ಐ.ಜಿ.ಪಿ., ಸಿ.ಓ.ಡಿ.ರವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಸಾರ್ವಜನಿಕರ ಸಮಕ್ಷಮ ತೆರೆದು ಬಹಿರಂಗಪಡಿಸುವರು. ಟೆಂಡರ್ ಅಥವಾ ಸವಾಲುದಾರರಲ್ಲಿ ಅತೀ ಹೆಚ್ಚಿನ ದರವನ್ನು ಯಾರು ನಮೂದಿಸಿರುವರೊ ಅವರನ್ನು ಯಶಸ್ವಿ ಟೆಂಡರ್/ಸವಾಲುದಾರರೆಂದು ಪರಿಗಣಿಸಲಾಗುವುದು. ಮೊತ್ತ ಮೊದಲಿಗೆ ಬಹಿರಂಗ ಹರಾಜು ನಡೆಸಲಾಗುವುದು ನಂತರ ಟೆಂಡರ್‌ಗಳನ್ನು ಪರಿಗಣಿಸಲಾಗುವುದು.
9. ಯಶಸ್ವಿಯಾದ ಟೆಂಡರ್‌ದಾರರು/ ಸವಾಲುದಾರರು ವಾಹನಗಳ ಒಟ್ಟು ಬೆಲೆಯ 25% ರಷ್ಟು ಹಣವನ್ನು (ಠೇವಣಿ ಬಿಟ್ಟು) ಸ್ಥಳದಲ್ಲಿಯೇ ತುಂಬಬೇಕು ಉಳಿದ ಹಣವನ್ನು ಡಿ.ಜಿ.ಪಿ., ಸಿ.ಓ.ಡಿ. ರವರು ಸದರಿ ಹರಾಜನ್ನು ಅಂಗೀಕರಿಸಿದ ನಂತರ ಸಂಪೂರ್ಣ ಹಣ ಪಾವತಿ ಮಾಡಿ ತಮ್ಮ ಸ್ವಂತ ಖರ್ಚಿನಿಂದ 15 ದಿನಗಳೊಳಗಾಗಿ ವಾಹನವನ್ನು ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು. ತಪ್ಪಿದಲ್ಲಿ ಈಗಾಗಲೇ ಅವರು ತುಂಬಿದ 25% ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆ ಹೊರಡಿಸಲಾಗುವುದು.
10. ಎಲ್ಲಾ ಹಣವನ್ನು ಡಿ.ಜಿ.ಪಿ. ಸಿ.ಓ.ಡಿ. ರವರ ಕಛೇರಿಯಲ್ಲಿ ನಗದು ರೂಪದಲ್ಲಿ ತುಂಬಬೇಕು. ಚೆಕ್ಕುಗಳನ್ನು ಡಿ.ಡಿ.ಗಳನ್ನು ಸ್ವೀಕರಿಸಲಾಗುವುದಿಲ್ಲ.
11. ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರ್‌ದಾರರ ಹಾಗೂ ಸವಾಲುದಾರರ ಠೇವಣಿ ಹಣವನ್ನು ಸ್ಥಳದಲ್ಲಿಯೇ ಹಿಂದಿರುಗಿಸಲಾಗುವುದು.
12. ಮಾರಾಟ ತೆರಿಗೆಯನ್ನು ಹಾಗೂ ಇತರೆ ತೆರಿಗೆಗಳನ್ನು ಚಲಾವಣೆಯಲ್ಲಿರುವ ದರದ ನಿಯಮಗಳ ಆಧಾರದ ಮೇರೆಗೆ ಸವಾಲಿನ ಹಣದ ಜೊತೆಗೆ ವಸೂಲಿ ಮಾಡಲಾಗುವುದು.
13. ಹರಾಜು ಮಾಡುವ ವೇಳೆಯಲ್ಲಿ ಏನಾದರು ತಕರಾರು ಬಂದಲ್ಲಿ ಡಿ.ಐ.ಜಿ.ಪಿ., ಸಿ.ಓ.ಡಿ.ರವರು ಕೈಗೊಳ್ಳುವ ನಿರ್ಣಯವೇ ಅಂತಿಮವಾಗಿರುತ್ತದೆ.
14. ಹರಾಜಿನಲ್ಲಿ ಯಾವುದೇ ಸವಾಲನ್ನು/ ಟೆಂಡರ್‌ಗಳನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ಮುಂದೂಡುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಡಿ.ಜಿ.ಪಿ., ಸಿ.ಓ.ಡಿ. ರವರು ಹೊಂದಿರುತ್ತಾರೆ. ಇವರ ನಿರ್ಣಯವೇ ಅಂತಿಮವಾದುದು.
15. ಇಚ್ಛೆಯುಳ್ಳ ಟೆಂಡರ್‌ದಾರರು ಮತ್ತು ಸವಾಲುದಾರರು ಹರಾಜು ಮಾಡಲಿಕ್ಕಿರುವ ನಿರುಪಯುಕ್ತ ವಾಹನವನ್ನು ಹೇಗಿದೆಯೋ ಹಾಗೆ ಡಿ.ಜಿ.ಪಿ., ಸಿ.ಓ.ಡಿ. ರವರ ಕಛೇರಿ ವೇಳೆಯಲ್ಲಿ ನೋಡಬಹುದು.
16. ಟೆಂಡರ್‌ದಾರರು ಪ್ರತಿ ವಾಹನಕ್ಕೆ ಅತೀ ಹೆಚ್ಚಿನ ಬೆಲೆಯನ್ನು ಈ ಕೆಳಕಂಡ ನಮೂನೆಯಲ್ಲಿ ತೋರಿಸಬೇಕು. ಬೆಲೆಗಳನ್ನು ಅಕ್ಷರ ಮತ್ತು ಅಂಕಿಗಳಲ್ಲಿ ನಮೂದಿಸಬೇಕು.

ರವರಿಗೆ

ಡೈರೆಕ್ಟರ್ ಜನರಲ್ ಆಫ್ ಪೊಲೀಸ್

ಸಿ.ಓ.ಡಿ., ಕಾರ್ಲ್‌ಟನ್ ಹೌಸ್, ಪ್ಯಾಲೆಸ್ ರೋಡ್

ಬೆಂಗಳೂರು.

ಮಾನ್ಯರೆ,

ನಾನು ಈ ಮೂಲಕ ಈ ಕೆಳಗೆ ತೋರಿಸಿರುವ ನಿರುಪಯುಕ್ತ ವಾಹನಕ್ಕೆ ಅತೀ ಹೆಚ್ಚಿನ ಬೆಲೆಯನ್ನು ನಮೂದಿಸಿರುತ್ತೇನೆ. ನಿಮ್ಮ ಅಧಿಸೂಚನೆ ಸಂಖ್ಯೆ:ಎಂಟಿ:113:ಸಿಓಡಿ:04-05 ದಿನಾಂಕ:.......06.04 ರ ಪ್ರಕಾರ ರ ನಿಯಮ ಮತ್ತು ಷರತ್ತುಗಳಿಗೆ ಒಪ್ಪಿಕೊಂಡು ರೂ.2000-00 ಗಳನ್ನು ಠೇವಣಿ ಹಣವನ್ನಾಗಿ ಸಂದಾಯ ಮಾಡಿರುತ್ತೇನೆ.

| ಕ್ರ.ಸಂ. | ವಾಹನ ಸಂಖ್ಯೆ | ಸೂಚಿಸಿರುವ ಅತೀ ಹೆಚ್ಚಿನ ಬೆಲೆ | ಷರಾ |
|---|---|---|---|
| 1. | | | |

ತಮ್ಮ ವಿಶ್ವಾಸಿ,

(ಟೆಂಡರ್‌ದಾರರ ಸಹಿ ಮತ್ತು ಪೂರ್ಣ ವಿಳಾಸ)

ಡೈರೆಕ್ಟರ್ ಜನರಲ್ ಆಫ್ ಪೊಲೀಸ್,

ಸಿ.ಓ.ಡಿ. ಬೆಂಗಳೂರು ರವರ ಪರವಾಗಿ.

ಪಿ.ಆರ್. 259

## ಸೂಪರಿಂಟೆಂಡೆಂಟ್ ಆಫ್ ಪೊಲೀಸ್‌ರವರ ಕಛೇರಿ, ಪೊಲೀಸ್ ವಾಹನ ಚಾಲನಾ ಮತ್ತು ನಿರ್ವಹಣಾ ಶಾಲೆ, ಯಲಹಂಕ, ಬೆಂಗಳೂರು

### ಅಧಿಸೂಚನೆ

### (ದರಖಾಸ್ತು ಸಹಿತ ಹರಾಜು)

**ಸಂಖ್ಯೆ: ಪಿಡಿಎಂಎಸ್:ಎಂಟಿ:582,567,568:2002-03 ದಿನಾಂಕ: 29ನೇ ಮೇ 2004**

**ವಿಷಯ :** ಪಿ.ಡಿ.ಎಂ.ಎಸ್. ಯಲಹಂಕದಲ್ಲಿಯ ನಿರುಪಯುಕ್ತ ವಾಹನಗಳನ್ನು ಟೆಂಡರ್‌ನ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ :** 1. ಸರ್ಕಾರಿ ಆದೇಶ ಸಂಖ್ಯೆ:ಹೆಚ್‌ಡಿ 68: ಇಎಂವಿ 2003, ಬೆಂಗಳೂರು, ದಿನಾಂಕ: 3.10.2003

2. ಮಾನ್ಯ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಆದೇಶ ಸಂಖ್ಯೆ: ವಾಸಾ (1) 90/2002-03, ದಿನಾಂಕ: 18.10.2003.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಆರಕ್ಷಕ ವಾಹನ ಚಾಲನಾ ತರಬೇತಿ ಮತ್ತು ನಿರ್ವಹಣಾ ಶಾಲೆ, ಯಲಹಂಕದಲ್ಲಿಯ ಈ ಕೆಳಕಂಡ ನಿರುಪಯುಕ್ತ ವಾಹನಗಳನ್ನು ಟೆಂಡರ್ ಕಂ ಬಹಿರಂಗ ಹರಾಜು (ಟೆಂಡರ್ ಕಂ ಆಕ್ಷನ್) ಮೂಲಕ ದಿನಾಂಕ: 29.6.2004 ರಂದು ಬೆಳಗ್ಗೆ 11 ಗಂಟೆಗೆ ಪಿ.ಡಿ.ಎಂ.ಎಸ್. ಯಲಹಂಕ, ಬಳ್ಳಾರಿ ರಸ್ತೆ, ಬೆಂಗಳೂರು-63 ಇಲ್ಲಿ ಈ ಕೆಳಗೆ ನಮೂದಿಸಿದ ಷರತ್ತುಗಳ ಮೇಲೆ ದರಖಾಸ್ತು ಸಹಿತ ಹರಾಜು ಮಾಡಲಾಗುವುದು.

| ಅ.ನ | ವಾಹನ ನೋಂದಣಿ ಸಂಖ್ಯೆ | ಮಾದರಿ | ಖರೀದಿಸಿದ ವರ್ಷ |
|---|---|---|---|
| 1. | ಸಿ.ಎ.ಜಿ. 253 | ಅಂಬಾಸಿಡರ್ ಕಾರ್ | 1981 |
| 2. | ಸಿ.ಎ.ಜಿ. 396 | ಮಹೀಂದ್ರ ಮತ್ತು ಮಹೀಂದ್ರ ಜೀಪು-ಪೆಟ್ರೋಲ್ | 1982 |
| 3. | ಎಂ.ಇ.ವಿ. 6405 | ಸ್ಟೇಷನ್ ವ್ಯಾಗನ್ ಕಾರ್ | 1972 |

### ಹರಾಜಿನ ಷರತ್ತು ಮತ್ತು ನಿಬಂಧನೆಗಳು:

1. ಮೊಹರ್ ದರಖಾಸ್ತುಗಳನ್ನು ಪೊಲೀಸ್ ಸೂಪರಿಂಟೆಂಡೆಂಟ್, ಪಿ.ಡಿ.ಎಂ.ಎಸ್. ಯಲಹಂಕ, ಬೆಂಗಳೂರು-63, ಇವರಿಗೆ ಕಳುಹಿಸತಕ್ಕದ್ದು. ಲಕೋಟೆಯ ಮೇಲೆ ನಿರುಪಯುಕ್ತ ವಾಹನಗಳ ಖರೀದಿಗಾಗಿ ಎಂದು ನಮೂದಿಸಿ ಕಳುಹಿಸಿ ಕೊಡಬೇಕು.
2. ಅವರವರ ಬೆಲೆಯನ್ನು ಅಂಕಿಗಳಲ್ಲಿ ಮತ್ತು ಅಕ್ಷರಗಳಲ್ಲಿ ಬರೆದಿರತಕ್ಕದ್ದು. ದರಖಾಸ್ತು ಹರಾಜುಗಳ ಪಟ್ಟಿಯನ್ನು ಈ ಕಛೇರಿಯಿಂದ ಪಡೆಯಬಹುದು.
3. ಹರಾಜುದಾರರು ರೂ.1,000-00 (ರೂಪಾಯಿ ಒಂದು ಸಾವಿರ ಮಾತ್ರ) ಠೇವಣಿಯನ್ನು ಹರಾಜು ಪ್ರಾರಂಭವಾಗುವುದಕ್ಕಿಂತ ಮುಂಚಿತವಾಗಿ ಪೊಲೀಸ್ ಸೂಪರಿಂಟೆಂಡೆಂಟ್, ಪಿ.ಡಿ.ಎಂ.ಎಸ್., ಯಲಹಂಕ, ಬೆಂಗಳೂರು, ಇವರಲ್ಲಿ ಆಗಲಿ ಅಥವಾ ಇವರಿಂದ ನೇಮಕವಾದಂತ ಹರಾಜು ಮಾಡುವ ಅಧಿಕಾರಿಯವರಲ್ಲಿ ಸಂಚಕಾರವಾಗಿ ಇಡಬೇಕು.
4. ಪ್ರತಿಯೊಂದು ವಾಹನಗಳನ್ನು ಅತೀ ಹೆಚ್ಚಿನ ಮೌಲ್ಯದಲ್ಲಿ ಕೂಗಿದ ಹರಾಜಿನವರಿಗೆ/ಟೆಂಡರ್‌ದಾರರಿಗೆ ವಾಹನಗಳನ್ನು ಕೊಡಲಾಗುವುದು.
5. ಲೀಲಾವಿನ ಹಣವನ್ನು ಖರೀದಿದಾರರು ವಾಹನ ಖರೀದಿಸಿದ ದಿನದಂದೇ ಹರಾಜು ಯಾಲಂ ಆದ ಮೊತ್ತದ ಶೇಖಡ 25 ಪಾವತಿ ಮಾಡಬೇಕು, ಒಂದು ವೇಳೆ ಹಣ ಕಟ್ಟದಿದ್ದಲ್ಲಿ ಖರೀದಿಸಿದ ವಾಹನಗಳನ್ನು ಪುನಃ ಅಂದೇ ಹರಾಜು ಮಾಡಲಾಗುವುದು. ಒಂದು ವೇಳೆ ತರುವಾಯದ ವಿಕ್ರಯ ಧನ ಮೊದಲಿನ ಲೀಲಾವಿನಕ್ಕಿಂತ ಕಡಿಮೆಯಾದಲ್ಲಿ ತಪ್ಪಿತಸ್ಥರಾದ ಮೊದಲಿನ ಖರೀದಿದಾರರು ಭಿನ್ನತೆಯನ್ನು ಸರಿಪಡಿಸಿಕೊಡಬೇಕು.

6. ಹರಾಜು ಮಾಡುವ ಅಧಿಕಾರಿಯು ಯಾವುದೇ ಕಾರಣಕ್ಕಾಗಿ ಲೀಲಾವನ್ನು ಮುನ್ಸೂಚನೆಯಿಲ್ಲದೆ ಹಸ್ತಾಂತರ ಮಾಡಲು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಪಡೆದಿರುತ್ತಾರೆ.
7. ವಾಹನಗಳನ್ನು ಖರೀದಿ ಮಾಡುವ ಹಣದ ಮೇಲೆ ಕರ್ನಾಟಕ ರಾಜ್ಯ ಮಾರಾಟ ತೆರಿಗೆಯನ್ನು ಲೀಲಾವಿನ ಹಣದ ಜೊತೆಯಲ್ಲಿಯೇ ವಸೂಲಿ ಮಾಡಲಾಗುವುದು.
8. ವಾಹನಗಳನ್ನು ಖರೀದಿ ಮಾಡಿದವರೇ ತಮ್ಮ ಲೀಲಾವಿನ ವಾಹನಗಳನ್ನು ಉಳಿದ ಶೇಕಡ 75 ಹಣವನ್ನು ಕಟ್ಟಿದ ನಂತರ ಸ್ಥಳದಿಂದ ಸಾಗಿಸುವ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕು.
9. ಸಂಚಕಾರವಾಗಿಟ್ಟ ರೂ.1,000-00 (ರೂಪಾಯಿ ಒಂದು ಸಾವಿರ ಮಾತ್ರ) ಗಳನ್ನು ಅಯಶಸ್ವಿಯಾದ ಖರೀದಿದಾರರಿಗೆ ಲೀಲಾವ್ ಮುಗಿದ ನಂತರ ಅದೇ ದಿನಂದಂದು ವಾಪಸ್ಸು ಮಾಡಲಾಗುವುದು.
10. ಸರ್ಕಾರದ ವಸ್ತುಗಳ ಹರಾಜಿನಲ್ಲಿ ಭಾಗೀದಾರರಾಗಿರುವರೆಲ್ಲರೂ ಸರ್ಕಾರದ ನಿಯಮಗಳನ್ನು ವಿಶ್ವಾಸಿಯಾಗಿ ಪರಿಪಾಲಿಸಬೇಕು.
11. ಈ ಲೀಲಾವಿನಲ್ಲಿ ಏನಾದರೂ ವ್ಯತ್ಯಾಸ ಮತ್ತು ಇತರೆ ತೊಂದರೆ ಉದ್ಭವಿಸಿದ್ದಲ್ಲಿ ಮಾನ್ಯ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು, ಇವರ ಆದೇಶವೇ ಅಂತಿಮ ಆದೇಶವಾಗಿರುತ್ತದೆ.
12. ಸದರಿ ಮೊಹರ್ ದರಖಾಸ್ತುಗಳನ್ನು ಕಛೇರಿಯ ವೇಳೆಯಲ್ಲಿ ದಿನಾಂಕ: 28.06.2004ರ ಸಾಯಂಕಾಲ 5.00 ಗಂಟೆಯವರೆಗೆ ಸ್ವೀಕರಿಸಲಾಗುವುದು, ನಂತರ ದರಖಾಸ್ತುಗಳನ್ನು ಸ್ವೀಕರಿಸಲಾಗುವುದಿಲ್ಲ.
13. ಸದರಿ ಲೀಲಾವಿಗೆ ಸಂಬಂಧಪಟ್ಟಂತಹ ನಿರುಪಯುಕ್ತ ವಾಹನಗಳನ್ನು ಪೊಲೀಸ್ ಸೂಪರಿಂಟೆಂಡೆಂಟ್, ಪಿ.ಡಿ.ಎಂ.ಎಸ್. ಇವರಲ್ಲಿ ಹೋಗಿ ನೋಡಿಕೊಳ್ಳಬಹುದು.
14. ವಾಹನಗಳ ಲೀಲಾವು ಅವುಗಳು ಯಾವ ಸ್ಥಿತಿಯಲ್ಲಿ ಇದೆಯೋ ಅದೇ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು ಮತ್ತು ಅದೇ ಸ್ಥಿತಿಯಲ್ಲಿ ಹಸ್ತಾಂತರಗೊಳಿಸಲಾಗುವುದು.
15. ಹರಾಜಿನಲ್ಲಿ ಭಾಗವಹಿಸುವವರು ರೂ.1,000-00 ಸಂಚಕರವಾಗಿಟ್ಟು ಭಾಗವಹಿಸತಕ್ಕದ್ದು. ಅಂಚೆಯಲ್ಲಿ ಕಳುಹಿಸುವವರು ರೂ.1,000-00 ಡಿ.ಡಿ.ಯನ್ನು ಮಾನ್ಯ ಪೊಲೀಸ್ ಸೂಪರಿಂಟೆಂಡೆಂಟ್, ಪಿ.ಡಿ.ಎಂ.ಎಸ್. ಯಲಹಂಕ, ಬೆಂಗಳೂರು, ಇವರ ಹೆಸರಿನಲ್ಲಿ ಕಳುಹಿಸತಕ್ಕದ್ದು.
16. ಈ ಕುರಿತು ಏನಾದರೂ ಹೆಚ್ಚಿನ ವಿವರ ಬೇಕಾದಲ್ಲಿ ಕಛೇರಿಯ ವೇಳೆಯಲ್ಲಿ ಪೊಲೀಸ್ ಸೂಪರಿಂಟೆಂಡೆಂಟ್, ಪಿ.ಡಿ.ಎಂ.ಎಸ್. ಯಲಹಂಕ, ಇವರನ್ನಾಗಲಿ ಅಥವಾ ಈ ಕೆಳಗೆ ಸಹಿ ಮಾಡಿದ ಅಧಿಕಾರಿಯವರನ್ನಾಗಲಿ ಭೇಟಿಯಾಗಿ ವಿವರ ಪಡೆದುಕೊಳ್ಳಬಹುದು.
17. ಲೀಲಾವಿನಲ್ಲಿ ಭಾಗವಹಿಸಲಿಚ್ಚಿಸುವವರು ಯಾವುದೇ ತರಹದ ಚೆಕ್ಕನ್ನು, ಕ್ರೆಡಿಟ್ ಕಾರ್ಡ್ ಕೊಟ್ಟಲ್ಲಿ ಅಂಗೀಕರಿಸಿ ಕೊಳ್ಳಲಾಗುವುದಿಲ್ಲ.
18. ಮೊಹರ್ ದರಖಾಸ್ತುಗಳನ್ನು ಟೆಂಡರ್‌ನಲ್ಲಿ ಭಾಗವಹಿಸುವವರ ಸಮಕ್ಷಮದಲ್ಲಿ ಬಹಿರಂಗ ಹರಾಜು ಮುಗಿದ ನಂತರ ತೆರೆಯಲಾಗುವುದು.
19. ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸಲು ಸಂಚಕಾರವಾಗಿಟ್ಟವರನ್ನು ಮಾತ್ರ ಹರಾಜು ಕೂಗಲು ಅನುಮತಿಸಲಾಗುವುದು. ಬೇರೆಯವರು ಭಾಗವಹಿಸುವುದನ್ನು ನಿಷೇಧಿಸಿದೆ.
20. ಟೆಂಡರ್ ಹಾಕಿದವರು ಸಹ ಹರಾಜಿನಲ್ಲಿ ಭಾಗವಹಿಸಬೇಕಾದರೆ ಮುಂಗಡ ಸಂಚಾಕಾರವಾಗಿ ರೂ.1,000-00 ಗಳನ್ನು ಪಾವತಿಸಿಯೇ ಹರಾಜಿನಲ್ಲಿ ಭಾಗವಹಿಸತಕ್ಕದ್ದು.

ಪಿ.ಆರ್.260 ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಪಿ.ಡಿ.ಎಂ.ಎಸ್. ಯಲಹಂಕ, ಬೆಂಗಳೂರು.

**IN THE COURT OF THE IV. ADDL. CITY CIVIL AND SESSIONS JUDGE, MAYOHALL, BANGALORE**

**G& W.C. 15020/2003**

**Petitioners :** 1. Smt. K. Manjula W/o M.S. Manjunath. Aged 32 years.
2. Sri. M. S. Manjunath S/o M. I. Subbarayappa 35 years.
Both R/o No. 14, 11 th Cross, Sampangiramanagar, Bangalore-27.

Vs

**Respondent :** Nil.

**PUBLIC NOTICE**

Notice is hereby given that a petition have been made to this court under Section 10 of the Guardian and wards Act, for appointment of the second petitioner as the guardian to the minor M.M.Maheswar and accord permission to sell the schedule property standing in the name of minor and first petitioner.

The court has fixed 17.6.04 for hearing of the said petition, all persons claiming to have any interest may come and see the proceedings before the appointment of second petitioner as guardian.

**SCHEDULE**

All that piece and parcel of residential property bearing corporation No. 14 (formerly CITB No. 227, Sampigehalli 2nd Stage) situated at 11th Cross, Sampangiramanagar in Ward No. 77, Bangalore, measuring East to West 20ft. North to South 22ft. and founded on east by private property, west by Private property, North by Road, South by Private property.

Given under my hand the seal of the court this the 4th day of February. 2004

By Order of the Court,
Asst. Registrar,
City Civil Court, Mayohall, Bangalore.

PD-38

**IN THE COURT OF THE IV. ADDL. CITY CIVIL JUDGE, MAYOHALL, BANGALORE**
**P& S.C. 15010/2004**

**Petitioners :**
1. Lakshmi, 28 years, w/o late Shekar H.Salian, R/o No. 301, 3rd Cross, Chamundinagar, R.T. Nagar, Bangalore-32.
2. Kum. Lavanya, 6 years, d/o late Shekar H. Salian,
3. Kum. Lalitha, 4 years, D/o late Shekar H. Salian,
(Petitioners No. 2 & 3 are minors and are residing with their natural guardian mother the petitioner No.1).

Vs

**Respondent :** Nil.

**PUBLIC NOTICE**

Notice is hereby given that a petition under Sec. 372 of the Indian Succession Act has been made to this court for grant of succession certificate in respect of the debt and securities of the deceased Shekar H. Salian who died on 25.9.2003 at Bangalore.

Be it know that no caveat has been entered and the said petition is posted for hearing on 7.7.04. All persons claiming to have any interest in the assets of the deceased may come and see the proceedings before the grant of succession certificate.

Given under my hand and the seal of the court this the 15th day of March, 2004.

By Order of the Court,
PD-49 Asst. Registrar,
City Civil Court, Mayohall Unit, Bangalore.

**IN THE COURT OF THE IV. ADDL. CITY CIVIL JUDGE, MAYOHALL, BANGALORE**
**P& S.C. 15012/2004**

**Petitioners :**
1. Smt. G. Kamalamma W/o B. Govindaswamy, Aged 47 years,
2. B. Govindaswamy, aged about 51 years, Husband of Petitioner No.1.
Both resident of No.11, Amman Illam, T.C. Palya Cross, Virgonagar Post, B'lore.

Vs

**Respondent :** Nil.

**PUBLIC NOTICE**

Notice is hereby given that a petition under Section. 372 of the Indian Succession Act has been made to this court for grant of succession certificate in respect of the debt and securities of the deceased G. Gubendran who died on 1.8.2003.

Be it know that no caveat has been entered and the said petition is posted for hearing on 23.6.04 All persons claiming to have any interest in the esatate of the deceased may come and see the proceedings before the grant of succession certificate.

Given under my hand and the seal of the court this the 22nd day of March, 2004.

By Order of the Court,
PD-50 Asst. Registrar,
City Civil Court, Mayohall Unit, Bangalore.

**IN THE COURT OF THE IV. ADDL. CITY CIVIL JUDGE, MAYOHALL, BANGALORE**
**C.C.H.21 P& S.C. 15016/2004**

**Petitioners :**
1. Smt. Parameswari W/o K.P. Parameswaran (late) aged 38 years.
2. K. P. Udayakumar S/o K. P. Parameswaran, aged 18 years.
3. K. P. Bhagyalakshmi D/o K.P. Parameswaran, aged about 14 years, being minor, represented by her mother and natural guardian, Smt. Parameswari, I Ptr. herein
All residing at No. 10/7, 2nd Street, A.N. Street Cross, Ashokanagar, Bangalore-25.

Vs

**Respondent :** Nil.

**PUBLIC NOTICE**

Notice is hereby given that a petition has been made to this Court under Sec. 372 of the Indian Succession Act for grant of succession certificate in respect of the debts and securities of the deceased K.P. Parameswaran, who died on 29.9.2003.

Be it know that no caveat has been entered and the said petition is posted for hearing on 17.6.04 All persons claiming to have any interest may come and see the proceedings before the grant of succession certificate.

Given under my hand and the seal of the court this the 20th May, 2004.

By Order of the Court,
PD-51 **SHERISTEDAR**
IV Addl. City Civil Court, Mayohall Unit, Bangalore.

**P.N. MAYOHALL**

**IN THE COURT OF THE IV. ADDL. CITY CIVIL JUDGE, MAYOHALL, BANGALORE**

**G& W.C.No.15004/2004**

**Petitioner :** 1. Sulaiman Jamal No. 25, Dods worth Layout, whitefield, Bangalore-66

Vs

**Respondent :** Nil.

**PUBLIC NOTICE**

Notice is hereby given that a petition have been made to this court under Section 29 & 41 of the indian Lunacy Act, for appointment of the petitioner Mr. Sulaiman Jamal as the Guardian and to accord permission to draw Family Pension benefits of the Lunacy/Patient Ms. Charmaine Fernandes.

The court has fixed 26.6.2003 for hearing of the said petition, all persons claiming to have any interest may come and see the proceedings before the appointment of the petitioner as guardian.

Given under my hand and the seal of the court this the 26th May, 2004

By Order of the Court,
Asst. Registrar,
City Civil Court, Mayohall, Bangalore.

PD-52

**IN THE COURT OF THE IV. ADDL. CITY CIVIL AND SESSIONS JUDGE, MAYOHALL, BANGALORE**

**G& W.C.No.15016/2003 HG.25.3.04**

**Petitioner :** 1. Goutham M. Baldotha, S/o Gowtham Chand, Kartha of Hindu undivided family, 36 years, Residing at No. 114, Narayana Pillai Street, Bangalore.

Vs

**Respondent :** Nil.

**PUBLIC NOTICE**

Notice is hereby given that a petition has been made to this court under Section 8(1) & (2) of the Hindu Minority and Guardianship Act, prays for permission to sell the schedule property and to receive consideration and also to invest the same for education of their children, invest rest of the amount in their names in respect of their shares.

The court has fixed 17.6.04 for hearing of the said petition, all persons claiming to have any interest may come and see the proceedings before grant of permission to the petitioner.

**SCHEDULE**

All that piece and parcel of immovable property bearing No. 157 and 159 presently bearing Corporation No. 218 and 218/1, situated at Venkateshpura Gramatana, K.G.Halli Dakle, Kasaba Hobli, Bangalore North Taluk, Bangalore, measuring East to West 57' and North to South 45' totally measuring 2565 sq. ft. and bounded on East property bearing No. C-113 belonging to T. Ramamurthy, West Nagawara Main Raod, North 5' passage and others property South property of Sri. Munichowdappa.

Given under my hand and the seal of the court this the 15th day of December, 2003,

By Order of the Court,
Asst. Registrar,
City Civil Court, Mayohall, Bangalore.

PD-53

**ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ವಿಜಾಪೂರ ರವರ ಕಛೇರಿ, ವಿಜಾಪೂರ ಜಿಲ್ಲೆ**

**ವಿಷಯ :** ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ ವಾಹನಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಕುರಿತು.

ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ ಈ ಕೆಳಕಂಡ ವಾಹನಗಳನ್ನು ಎಲ್ಲಿವೆಯೋ ಹೇಗಿವೆಯೋ ಯಥಾ ಸ್ಥಿತಿಯಲ್ಲಿ ಕೆಳಗೆ ಸೂಚಿಸಿರುವ ಷರತ್ತುಗಳ ಪ್ರಕಾರ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ವಿಜಾಪೂರ ಕಛೇರಿ ಇವರ ಆವರಣದಲ್ಲಿ ದಿನಾಂಕ: 5.7.2004 ರಂದು ಬೆಳಿಗ್ಗೆ 11.00 ಗಂಟೆಗೆ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಹರಾಜು ನಿರ್ವಹಣಾಧಿಕಾರಿಯನ್ನಾಗಿ ಅಬಕಾರಿ ಉಪ ಅಧೀಕ್ಷಕರು ವಿಜಾಪೂರ ಉಪ ವಿಭಾಗ ಇವರನ್ನು ನೇಮಿಸಲಾಗಿದೆ.

| ಕ್ರ. ಸಂ. | ವಾಹನಗಳ ವಿಧ | ವಾಹನಗಳ ನೋಂದಣಿ ಸಂಖ್ಯೆ: |
|---|---|---|
| 1) | ಟ್ಯಾಂಕರ್ | ಎಂ.ಸಿ.ಯು.:4530 |
| 2) | ಸ್ವರಾಜ್ ಮಜಡಾ | ಕೆ.ಎ.04:ಬಿ:3434 |

ವಾಹನಗಳನ್ನು ನೋಡಬಯಸುವ ಸಾರ್ವಜನಿಕರು ಕಛೇರಿಯ ಸಮಯದಲ್ಲಿ ಮುಂಜಾನೆ 10.00 ಗಂಟೆಯಿಂದ ಸಾಯಂಕಾಲ 5.30 ಗಂಟೆಯೊಳಗಾಗಿ ನೋಡಬಹುದಾಗಿದೆ.

**ಷರತ್ತುಗಳು:**

1. ಅಬಕಾರಿ ಇಲಾಖೆಯ ಸಿಬ್ಬಂದಿ ಹರಾಜಿನಲ್ಲಿ ಪ್ರತ್ಯಕ್ಷ ಯಾ ಪರೋಕ್ಷವಾಗಿಯಾಗಲೀ ಭಾಗವಹಿಸುವಂತಿಲ್ಲ.
2. ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಸಾರ್ವಜನಿಕರು ಮೇಲ್ಕಾಣಿಸಿದ ದಿನದಂದು ಬೆಳಗ್ಗೆ 9.30 ರಿಂದ 11.00 ಗಂಟೆ ಒಳಗಾಗಿ ಟ್ಯಾಂಕರ್, ಸ್ವರಾಜ್ ಮಜಡಾ ಇವುಗಳಿಗೆ ರೂ.20,000-00 ರೂ.ಗಳ ಮುಂಗಡ ಠೇವಣಿ ಇಟ್ಟು ರಶೀದಿ ಪಡೆಯತಕ್ಕದ್ದು.
3. ಯಶಸ್ವಿ ಸವಾಲುದಾರರು ಶೇಕಡಾ 25 ರಷ್ಟು ಹಣವನ್ನು ಹರಾಜಿನ ದಿನದಂದೆ ಪಾವತಿಸಿ ರಶೀದಿ ಪಡೆಯತಕ್ಕದ್ದು. ಇನ್ನುಳಿದ ಶೇಕಡಾ 75 ರಷ್ಟು ಹಣವನ್ನು ಸ್ಥಿರೀಕರಣ ಆದೇಶ ತಲುಪಿದ 03 ದಿನಗಳೊಳಗಾಗಿ ಪಾವತಿಸತಕ್ಕದ್ದು. ತಪ್ಪಿದಲ್ಲಿ ಶೇಕಡಾ 25 ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಅಧಿಕಾರ ಅಬಕಾರಿ ಅಧೀಕ್ಷಕರು, ವಿಜಾಪೂರ ಜಿಲ್ಲೆ, ಇವರು ಹೊಂದಿರುತ್ತಾರೆ.
4. ಯಶಸ್ವಿ ಸವಾಲುದಾರರು ಚಾಲ್ತಿಯಲ್ಲಿರುವ ದರದಲ್ಲಿ ಮಾರಾಟ ತೆರಿಗೆ ಹಾಗೂ ಇತರೆ ಕರಗಳನ್ನು ಪಾವತಿ ಮಾಡತಕ್ಕದ್ದು.
5. ಹರಾಜು ನಿರ್ವಹಣಾ ಅಧಿಕಾರಿಯ ನಿರ್ಣಯವೇ ಅಂತಿಮ ನಿರ್ಣಯ.
6. ಯಶಸ್ವಿ ಸವಾಲುದಾರರು ನೀಡಿರುವ ಸವಾಲನ್ನು ಸ್ಥಿರೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಅಬಕಾರಿ ಅಧೀಕ್ಷಕರು, ವಿಜಾಪೂರ ಜಿಲ್ಲೆ, ಇವರು ಹೊಂದಿರುತ್ತಾರೆ.

**ಕೆ. ಆರ್. ಗೌಡ್ರ**
ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ವಿಜಾಪೂರ ಜಿಲ್ಲೆ, ವಿಜಾಪೂರ.

ಪಿ.ಆರ್.266